# 30

# ಜಾತಕ ಕಥೆಗಳು

ಸಂಗ್ರಾಹಕರು:

ಶ್ರೀ| ಎಮ್. ಸುಬ್ರಾಯನ್, ವಿದ್ವಾನ್.

ಮಂಗಳೂರು.

1955.




ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ) ಲೇ: ದಿ| ಎಮ್. ಎನ್. ಕಾಮತ್.
೨. ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ) ಲೇ: ದಿ| ಎಮ್. ಎನ್. ಕಾಮತ್.
೫. *ಅದ್ಭುತ ತ್ಯಾಗ ಮತ್ತು ಇತರ ಕಥೆಗಳು (ಡಾ| ಎಮ್. ಆರ್. ಭಟ್.)
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. 'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ)
೯. *ಲಂಚಕ್ಕೆ ಸಂಚಕಾರ (ಡಾ| ಎಸ್. ಪಿ. ಭಟ್.)
೧೦. ಟಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿತೀಯ ಮುದ್ರಣ)
೧೨. ಜೀವನದ ಮೌಲ್ಯ ಮತ್ತು ಇತರ ಕಥೆಗಳು. (ಎಲ್. ಎಸ್. ನಾಯಕ.)
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು. (ಡಾ| ವಿ. ಆರ್. ಭಟ್.)
೧೪. "ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು.
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ).
೧೬. ವೇಣೂರಿನ ಗತವೈಭವ. (ಲೇ: ದಿ| ಪಂಡಿತ ಲೋಕನಾಥ ಶಾಸ್ತ್ರಿಗಳು.)
೧೭. ಒಗಟುಗಳು. [ಲೇ: ಶ್ರೀ ಟಿ. ಚಂದ್ರರಾಜ ಸೆಟ್ಟಿ.]
೧೮. ಜಗಳಗಂಟ ಮತ್ತು ಇತರ ಕಥೆಗಳು. [ಲೇ: ವೈದ್ಯಗುರು ಎಮ್. ಆರ್. ಭಟ್.]
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಖಪ್ಪ (ಲೇ: ದಿ| ಎಮ್. ಎನ್. ಕಾಮತ್)
೨೧. ಭಾರತದ ಮಹಾನಗರಗಳು (ಪ್ರಥಮ ಭಾಗ)
೨೨. ತಿರುಕ್ಕುರಲ್ (ಶ್ರೀ| ಡಿ| ಪುಟ್ಟಸ್ವಾಮಿ.)
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು. (ಲೇ: ಶ್ರೀ| ಬಿ. ಶಂಕರ ಭಟ್.)
೨೪. ಭಾರತದ ಮಹಾನಗರಗಳು (ದ್ವಿತೀಯ ಭಾಗ)
೨೫. ಧೈರ್ಯ ಮತ್ತು ಇತರ ಸತ್ಯಕಥಾನಕಗಳು. (ಶ್ರೀ ಎಲ್.ಎಸ್.ನಾಯಕ.)
೨೬. ಮಾರಾವತಾರ(ಏಕಪಾತ್ರ ಯಕ್ಷಗಾನ ಪ್ರಬಂಧ) (ಲೇ: ಶ್ರೀ|ಜಿ. ಆರ್.ಪಾಂಡೇಶ್ವರ)
೨೭. ಹಾಸವಿಲಾಸ (ಆರಿಸಿ ತೆಗೆದ ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು (ಸಂಗ್ರಾಹಕರು: ಡಾ| ಎಸ್. ಪಿ. ಭಟ್, ಮಂಗಳೂರು)
೩೦. ಜಾತಕ ಕಥೆಗಳು (ಸಂಗ್ರಾಹಕರು: ಎಮ್. ಸುಬ್ರಾಯನ್, ವಿದ್ವಾನ್.)

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಮೂವತ್ತು ಪುಸ್ತಕಗಳಲ್ಲಿ, ಒಟ್ಟು ಮೂವತ್ತು ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ 676 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

# ಜಾತಕ ಕಥೆಗಳು

## ಮುನ್ನುಡಿ.

ನಮ್ಮ ಪ್ರಾಚೀನ ವಾಙ್ಮಯದಲ್ಲಿ ಜನತೆಯ ಸಾಹಿತ್ಯವಿದೆ; ಅದು ಜನತೆಯ ಏಳ್ಗೆಯನ್ನು ಕಾಣುತ್ತಿದೆ. ನಮ್ಮ ವಾಙ್ಮಯವು ಕೇವಲ ಪಾರಮಾರ್ಥಿಕ ವಿಚಾರ ಗಳನ್ನಷ್ಟೆ ಒಳಗೊಂಡಿದೆಯೆಂದು ತಿಳಿವುದು ತಪ್ಪು. ಪರಲೋಕ ವಿಚಾರಗಳೊಂದಿಗೆ ಲೌಕಿಕ ವಿಚಾರವನ್ನು ಬೆರೆತು, ತಾತ್ವಿಕ ಉದಾಹರಣೆಗಳಿಂದ ಇಹಜೀವನದಲ್ಲಿ ಮಾನವನು ತನ್ನನ್ನು ಹೇಗೆ ತಿದ್ದಿಕೊಳ್ಳಬಹುದೆಂದು ತಿಳಿಸುವ ವಾಙ್ಮಯವು ಧಾರಾಳವಿದೆ. ಬೌದ್ಧರ ಜಾತಕ ಕಥೆಗಳು ಇಂಥವು.

ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ಈ ಕಥೆಗಳು ಎರಡು ಸಾವಿರ ವರ್ಷಗಳ ಹಿಂದಿನವು. ಅವು ಕಲ್ಲುಗಳಲ್ಲಿ ಕೆತ್ತಲ್ಪಟ್ಟು, ಶಿಲಾರೇಖೆಗಳೆನಿಸಿ, ಭರಹೂತದ ಸ್ತೂಪಗಳಲ್ಲಿವೆ.

ಸಮಾಜದ ಕಥೆಗಳನ್ನು ನಾವು ಓದುತ್ತಿರುವಾಗ ನಮ್ಮ ಕಣ್ಣೆದುರಿಗೆ ಮೊತ್ತ ಮೊದಲು ಮಾತೃಕುಟುಂಬಭರಣದ ಇಲ್ಲವೆ ಮಾತೃಸತ್ತೆಯ ಯುಗದ ಚಿತ್ರವು ಕಂಡುಬರುವುದು. ಪುರುಷನು ಅಧಿಕಾರಯುತನಿದ್ದರೂ ಆವನ ಸರ್ವ ಕರ್ಮ ಪರಿಣಾಮವು ಮಾತೃವಿನ ಕೈಯನ್ನು ಹೊಂದುತ್ತಿತ್ತು. ಜಾತಕ ಕಥೆಗಳಲ್ಲಿ ಅಂತಹ ಪ್ರಾಚೀನ ಯುಗದ ಕಥಾಚಿತ್ರಗಳಿಲ್ಲ.

ಮಾತೃಸತ್ತೆಯ ನಂತರ ಪಿತೃಸತ್ತೆಯ ಯುಗವು ಕಂಡು ಬರುವುದು. ಆರ್ಥಿಕ ಮತ್ತು ರಾಜನೀತಿಕ ಕಾರಣಗಳಿಂದ ಆಗ ಜನರು ಒಂದೆಡೆಯಿಂದ ಇನ್ನೊಂದೆಡೆಗೆ ತಿರುಗಾಡುವುದನ್ನು ಕಾಣುವೆವು. ಲೋಕದ ಸರ್ವಸಂಪತ್ತುಗಳು ಜನತೆಯವು, ಕೇವಲ ವ್ಯಕ್ತಿಗಳದ್ದಲ್ಲ.

ಆ ಮೇಲೆ ಜನಪದ ಯುಗವು ಪ್ರಾರಂಭಿಸುವುದು. ಜನಪದ ಯುಗವು ಗ್ರಾಮ ಪದ್ಧತಿಯ ಒಂದು ನೆಲೆ. ಈ ಕಾಲದಲ್ಲಿ ಜನರು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಂಚಾರಮಾಡುತ್ತ, ಒಂದು ಕಡೆ ಒಟ್ಟುಗೂಡಿ ನೆಲೆನಿಂತು, ಜನಪದದ ತಳಹದಿ ಹಾಕುವರು. ರಾಜನೀತಿಕ ದೃಷ್ಟಿಯಿಂದ ವಿಚಾರಿಸಿದರೆ, ಜನತೆಯ ಸಾಮರ್ಥ್ಯವೇ ರಾಜಸತ್ತೆಯ ಯುಗವನ್ನು ತಂದಿರುವುದೆಂದೂಹಿಸ ಬೇಕಾಗುತ್ತದೆ. ಆರ್ಥಿಕವಿಕಾಸ ದೃಷ್ಟಿಯಿಂದ ಶಿಕಾರಿಗಳ ಮತ್ತು ಪಶುಪಾಲಕರ ಯುಗ, ಅನಂತರ ಕಲಾಕೌಶಲ ಮತ್ತು ವ್ಯಾಪಾರ ಯುಗಕ್ಕೆ ಪ್ರವೇಶಿಸು

ವೆವು. ಸಾಮಾಜಿಕ ವಿಕಾಸ ದೃಷ್ಟಿಯಿಂದ ಏಕಾಕಿ ಜೀವನ ಪದ್ಧತಿಯೂ ಇರದೆ ಕುಟುಂಬ ಪರಿವಾರ ಜೀವನ ಪದ್ಧತಿಯೂ ಕಾಣಬರುವುದು.

ಜಾತಕ ಕಥೆಗಳು ಭಾರತದ ಅತೀ ಪ್ರಾಚೀನತರ ಕಥೆಗಳಲ್ಲವಾದರೂ, ಅವು ವಿಶಾಲತೆಯಿಂದ ಕೂಡಿದ ಕಥಾಸಂಗ್ರಹಗಳಾಗಿವೆ. ಅವುಗಳಿಂದ ದಿನ ದಿನ ಬದಲುಗೊಳ್ಳುವ ಸಮಾಜ ಸುಧಾರಣೆಯ ವಿಚಾರಗಳನ್ನು ಕಂಡುಕೊಳ್ಳಬಹುದು.

ಮನುಷ್ಯರ ಬಳವಣಿಗೆ ಚತುರ್ಮುಖವಾಗಿ ಉಂಟಾಗುತ್ತಿದೆ; ಅವನತಿಯೂ ಹಾಗೇ. ಆರ್ಥಿಕ, ರಾಜನೀತಿಕ, ಧಾರ್ಮಿಕ, ಸಾಮಾಜಿಕಗಳ ಬಳವಣಿಗೆಯು ಒಂದನ್ನೊಂದು ಬಿಟ್ಟಿರುವುದಿಲ್ಲ. ಒಂದರ ಬಳವಣಿಗೆ ಇನ್ನೊಂದರ ಏಳ್ಗೆಗೆ ಕಾರಣವಾಗುವುದು. ಜಾತಕ ಕಥೆಗಳು ಇಂತಹ ಆದರ್ಶದಿಂದ ಕೂಡಿವೆ. ಕೆಲವು ಕಥೆಗಳನ್ನು ಹೆಕ್ಕಿ ಇಲ್ಲಿ ಕೊಟ್ಟಿರುವೆವು.

▪▪▪▪▪▪▪▪▪

# ೧. ವ್ಯಕ್ತಿಗತ ಸಂಪತ್ತು

ಒಬ್ಬ ಅರಸನು ಒಂದು ಮಂಗವನ್ನು ಕಾಡಿನಿಂದ ಹಿಡಿದುತರಿಸಿದನು. ಆ ಮೇಲೆ ಅದನ್ನು ಬಹಳ ಕಾಲ ತನ್ನಲ್ಲಿರಿಸಿಕೊಂಡು ಸಾಕಿದನು. ಬಗೆ ಬಗೆಯ ಕೆಲಸಗಳನ್ನು ಅದಕ್ಕೆ ಕಲಿಸಿದನು. ಹೀಗೆ ಶಿಕ್ಷಣಕೊಟ್ಟು ಪಳಗಿಸಿದ ನಂತರ, ಅದನ್ನು ಬಿಡುವಂತೆ ತನ್ನ ಕೆಲಸಗಾರರಿಗೆ ಆಜ್ಞಾಪಿಸಿದನು. ಅದರಂತೇ, ಕೆಲಸಗಾರನು ಪಳಗಿಸಿದ ನಂತರ ಅದನ್ನು ಬಿಟ್ಟುಬಿಟ್ಟನು. ಅದು ಓಡಿ ಹೋಗಿ ತನ್ನ ಹಳೇ ಸಂಗಾತಿಗಳನ್ನು ಕೂಡಿಕೊಂಡಿತು. ಅದರ ಸಂಗಾತಿಗಳು ಅದನ್ನು ಕಂಡೊಡನೆ ಸುತ್ತುಗಟ್ಟಿ ನಿಂತವು, ಮತ್ತು ಪ್ರಶ್ನಿಸತೊಡಗಿದುವು: "ಓ ಗೆಳೆಯ! ಇಷ್ಟು ದಿನಗಳ ವರೆಗೆ ನೀನೆಲ್ಲಿದ್ದೆ?"

"ನಾನು ಮನುಷ್ಯರನ್ನು ಸೇರಿದ್ದೆ."— ಮಂಗ ಉತ್ತರವಿತ್ತಿತು.

"ಒಳ್ಳೆಯದು, ಮನುಷ್ಯರು ಎಂತಹರಿರುವರು? ನಾವು ಅವರ ಕರ್ತವ್ಯಗಳನ್ನು ಕೇಳಲು ಕುತೂಹಲಿಗಳಾಗಿರುವೆವು."

"ಮನುಷ್ಯ ಕರ್ತವ್ಯವೇ? ಅದನ್ನು ಕೇಳದಿರಿ. ಅದನ್ನು ಹೇಳದಿರುವುದೇ ಲೇಸು."

"ಅಲ್ಲ. ಅದನ್ನು ಹೇಳು. ನಾವು ಕೇಳುವ ತವಕಗೊಂಡಿದ್ದೇವೆ. ಹೇಳಲೇ ಬೇಕು."

"ನಿಮ್ಮ ಇಚ್ಛೆಯನ್ನು ಭಂಗಪಡಿಸಲಾರೆ. ಹೇಳುವೆ; ಕೇಳಿರಿ. ಮನುಷ್ಯರ ಜೀವನಕ್ರಮವಿಂತಿದೆ: ಅವರು ಒಂದೊಂದು ಮನೆಯಲ್ಲಿ

ಇಬ್ಬಿಬ್ಬರು ವಾಸಿಸುತ್ತಿರುವರು. ಅವರೊಳಗೆ ಒಬ್ಬ ಉದ್ದ ಮೀಸೆಯುವನಿದ್ದಾನೆ. ಇನ್ನೊಬ್ಬನು ಉದ್ದ ನೊಲೆಯುವನು. ಇವನು ಕಿವಿ ಚುಚ್ಚಿಸಿಕೊಂಡಿರುವನು. ಹಗಲಿರುಳು ಇವನದು ಒಂದೇ ಮಾತು: "ನನ್ನ ಬಂಗಾರ—ಆಭರಣ—ಚಿನ್ನ!" ಎಂದು ಕೇಳಿಕೊಂಡಿರುತ್ತಾನೆ. ಎದ್ದ ಕುಚಗಳುಳ್ಳವ ಹಣಕ್ಕೆ ಕೊಂಡಲ್ಪಟ್ಟವನು. ಅವನು ದಾಸ ದಾಸಿಯರಿಗೆ ಬಹಳವಾಗಿ ಪೀಡೆಕೊಡುತ್ತಿರುವನು."

ಮಂಗಗಳು ಹೇಳಿದವು: "ಸಾಕು ಮಾಡು. ಸಾಕು ಮಾಡು. ಹೆಚ್ಚು ಕೇಳಿದರೆ ಪಾಪವನ್ನು ಹೊಂದುವೆವು."

ಹೀಗೆ ಹೇಳಿ ಆ ಮಂಗಗಳು, ಯಾವ ಶಿಲೆಯ ಮೂಲೆಯಲ್ಲಿ ಅವು ಕುಳಿತಿದ್ದವೋ ಅದರಲ್ಲಿದ್ದ ಮನುಷ್ಯನ ಪಾಪ ಕಥೆಯನ್ನು ಕೇಳಿದುದರಿಂದ ಆ ಶಿಲೆಯು ಅಪವಿತ್ರವೆಂದರಿತು ಕೂಡಲೇ ಅಲ್ಲಿಂದ ಓಡಿದುವು.

■■■■■■■■■

## ೨. ಸಾಮಂತರ ಲೋಭ

ಒಬ್ಬ ರಾಜನಿದ್ದನು. ಅವನು ಕಡುಲೋಭಿಯಾಗಿದ್ದನು. ಇಂದ್ರನು ಒಮ್ಮೆ ಬ್ರಹ್ಮಚಾರಿಯ ವೇಷ ಧರಿಸಿ ಅಲ್ಲಿಗೆ ಬಂದನು. ಅರಸನು ಈ ಬ್ರಹ್ಮಚಾರಿಯನ್ನುದ್ದೇಶಿಸಿ ಕೇಳಿದನು: "ಓ ಬ್ರಹ್ಮಚಾರೀ! ಏತಕ್ಕಾಗಿ ಬಂದಿರುವೆ?"

"ಮಹಾರಾಜ! ನಾನು ಮೂರು ನಗರಗಳನ್ನು ನೋಡಿರುವೆನು. ಆ ನಗರಗಳು ಶಾಂತಿಯಿಂದ ತುಂಬಿವೆ. ಧನಧಾನ್ಯದಿಂದ ಸಮೃದ್ಧಿಗೊಂಡಿವೆ. ಆನೆ, ಕುದುರೆ, ರಥ, ಸೇನೆಗಳು ಬಹಳವಾಗಿರುವುವು. ಚಿನ್ನ ಬೆಳ್ಳಿಗಳಿಂದ ಕೂಡಿದ್ದು ಸ್ವರ್ಣಭೂಮಿಯಾಗಿದೆ. ಅವುಗಳನ್ನು ನಿನಗೆ ಗೆದ್ದುಕೊಡುವ ವಿಚಾರದಿಂದ ಬಂದಿರುತ್ತೇನೆ."

"ಬ್ರಹ್ಮಚಾರೀ! ಯಾವಾಗ ಪ್ರಯಾಣ ಬೆಳೆಸುವೆ?"

"ಮಹಾರಾಜ, ನಾಳೆ."

"ಹಾಗಾದರೆ ನಡೆ. ನಾಳೆ ಮುಂಜಾನೆ ಬಾ."

"ಒಳ್ಳೆಯುದು. ತಾವು ಸೇನೆಗಳನ್ನು ತ್ವರೆಯಿಂದ ಕೂಡಿಸಿರಿ"—ಎಂದು ಇಂದ್ರನು ನಡೆದನು.

ರಾಜನು ಕೂಡಲೇ ಸೇನೆಗಳಿಗೆ ಎಚ್ಚರವನ್ನಿತ್ತು ಅಣಿಗೊಳಿಸಿದನು. ಅಮಾತ್ಯರನ್ನು ಕರೆದು ಹೇಳಿದನು: "ಒಬ್ಬ ಬ್ರಾಹ್ಮಣ ತರುಣನು ಉತ್ತರ ಪಾಂಚಾಲ, ಇಂದ್ರಪ್ರಸ್ಥ ಮತ್ತು ಕೈಕಯ ಈ ದೇಶಗಳನ್ನು ಗೆದ್ದುಕೊಡುವೆನೆಂದು ಹೇಳಿರುವನು. ಅವನನ್ನು ಕೂಡಿ ಮೂರು ದೇಶಗಳನ್ನು ನಾವು ಜಯಿಸೋಣ ಮತ್ತು ಬ್ರಾಹ್ಮಣ ತರುಣನನ್ನು ಕೂಡಲೇ ಕರೆಯಬೇಕು."

"ದೇವಾ! ಅವನಿಗೆ ಎಲ್ಲಿ ಉಳಕೊಳ್ಳಲು ಆಜ್ಞಾಪಿಸಿರುವಿರಿ?"

"ನಾನು ಅವನಿಗೆ ಉಳಿಯಲು ನಿವಾಸಸ್ಥಾನವನ್ನಿತ್ತಿಲ್ಲ."

"ಅವನಿಗೆ ಊಟದ ಖರ್ಚನ್ನು ಕೊಡಲಾಗಿದೆಯೇ? ಊಟದ ವ್ಯವಸ್ಥೆಯನ್ನು ಮಾಡಿರುವಿರಾ?"

"ಅದನ್ನೂ ಮಾಡಿಲ್ಲ."

"ಮತ್ತೆಲ್ಲಿ ಅವನನ್ನು ಹುಡುಕಲಿ?"

"ನಗರದ ಬೀದಿಬೀದಿಗಳಲ್ಲಿ ಹುಡುಕಿರಿ."

ಅವರು ಅಂತೆಯೇ ಹುಡುಕಿ ನಿರಾಶರಾಗಿ ಹಿಂತಿರುಗಿ, "ಮಹಾಪ್ರಭೂ, ಎಲ್ಲಿಯೂ ಕಾಣಸಿಗಲಿಲ್ಲ"—ಎಂದರು.

ಬ್ರಹ್ಮಚಾರಿಯು ಕಾಣಸಿಗದೆ ಅರಸನಿಗೆ ಬಹಳ ಶೋಕವುಂಟಾಯಿತು; ಚಿಂತಾಪರನಾದನು. ಮುಂದೆ ಯೋಚನೆ ಮಾಡುತ್ತಾ, "ಓರ್ವ ತರುಣನು ಬಂದು, ಮೂರು ನಗರಗಳನ್ನು ಜಯಿಸಿ ನಿನಗೀವೆನೆಂದನು. ನಾನು ಅವನಿಗೆ ಉಳಿಯಲು ಹೇಳಲಿಲ್ಲ. ಊಟದ ವ್ಯವಸ್ಥೆ ಮಾಡಲಿಲ್ಲ. ಅವನು ಸಿಟ್ಟುಗೊಂಡು ಬೇರೆ ರಾಜನಲ್ಲಿಗೆ ಹೋಗಿರಬಹುದು. ಅಯ್ಯೋ! ಎಂಥ ಸಂಪತ್ತನ್ನು ಕಳಕೊಂಡೆನು!"—ಎಂದು ಮರುಗಿದನು. ಅವನ ಹೃದಯವು ಬಹಳವಾಗಿ ಚಂಚಲಗೊಂಡಿತು. ಬೇನೆಯಿಂದ ಉರಿದನು. ರಕ್ತ ಪ್ರಕೋಪವಾಯಿತು. ರಕ್ತಾತಿಸಾರಕ್ಕೂ ತೊಡಗಿತು....! ಲೋಭದ ಒಂದು ಪರಿಣಾಮವಿದು.

\.........

## ೩. ರಾಜರ ಅತ್ಯಾಚಾರ

ಒಂದು ರಾಜ್ಯದಲ್ಲಿ, ಅಧರ್ಮಿಯಾದ ಒಬ್ಬ ಅರಸನಿದ್ದನು. ಅನೀತಿಯಿಂದಲೇ ರಾಜ್ಯವನ್ನಾಳುತಿದ್ದನು. ಎಲ್ಲೆಡೆಗಳಲ್ಲೂ ಅತ್ಯಾಚಾರ–ಅನಾದರಗಳು ತುಂಬಿದ್ದುವು. ಯಂತ್ರದಿಂದ ಹಿಂಡುವಂತೆ ಜನರನ್ನು ಹಿಂಡಿ

ಬಿಡುತಿದ್ದನು. ಬಹಳ ಕ್ರೂರ ಸ್ವಭಾವಿಯಾಗಿದ್ದಂತೆ, ಸಾಹಸಿಯೂ ಆಗಿದ್ದನು. ಒಮ್ಮೆಯಾದರೂ ಅವನಲ್ಲಿ ದಯೆಯು ಉದ್ಭವಿಸಿದುದನ್ನು ಯಾರೂ ಕಂಡಿರಲಿಲ್ಲ. ಅರಮನೆಯೊಳಗೆ ಹೆಂಡತಿಗೆ, ಇತರ ಹೆಂಗಸರಿಗೆ, ಕಿರಿಯರಿಗೆ, ಹಿರಿಯರಿಗೆ, ಮಂತ್ರಿಗಳಿಗೆ, ಸೇವಕರಿಗೆ—ಎಲ್ಲರಿಗೂ ಪೀಡೆ ಕೊಡುತ್ತಿದ್ದನು; ಹೀಗಾಗಿ, ಎಲ್ಲರಿಗೂ ಅಪ್ರಿಯನಾಗಿದ್ದನು. ಆ ಅರಸನ ಹೆಸರು ಮಹಾಪಿಂಗಲನೆಂದಾಗಿದ್ದಿತು. ('ಪಿಂಗಲ'ನೆಂದ: ಬೆಕ್ಕಿನಂಥ ಕಣ್ಣುಳ್ಳವರಿಗೆ ಹೇಳುವರು.)

ಬಹುಕಾಲ ಆ ಪಿಂಗಲನ ರಾಜ್ಯಭಾರವು ನಡೆದು, ಕೊನೆಗೆ ಅವನ ಮೃತಿಯುಂಟಾಯಿತು. ಆದರಿಂದ, ರಾಜ್ಯದ ಜನರೆಲ್ಲರೂ ಸಂತೋಷಗೊಂಡರು, ಮತ್ತು ಸಂತೋಷದ ಉತ್ಸವವನ್ನೂ ಆಚರಿಸಿದರು. ಆ ಮೇಲೆ ಪದ್ಧತಿಯಂತೆ, ಅವನ ಮಗನನ್ನು ಸಿಂಹಾಸನಕ್ಕೇರಿಸಿದರು.

ರಾಜಾಭಿಷೇಕೋತ್ಸವದ ಭೇರಿಯು ಮೊಳಗುತಿತ್ತು. ತಳಿರು ತೋರಣ ಪತಾಕೆಗಳಿಂದ ನಗರವು ಶೃಂಗರಿಸಲ್ಪಟ್ಟದ್ದಿತು. ಎಲ್ಲ ಮನೆಗಳ ದ್ವಾರಗಳ ಮುಂದೆ ಮಂಟಪಗಳಿದ್ದುವು. ಎಲ್ಲೆಡೆಗಳಲ್ಲಿಯೂ ಅರಳು ಮತ್ತು ಹೂಗಳ ಮಳೆಗರೆಯುತ್ತಿದ್ದರು. ಮಂತ್ರಿಗಳು, ಸೇನಾಧಿಪತಿಗಳು, ಬ್ರಾಹ್ಮಣರು, ನಾಗರಿಕರು, ಇನ್ನಿತರರೂ ರಾಜನನ್ನು ಸುತ್ತುಗೂಡಿ ನಿಂತಿದ್ದರು. ಒಬ್ಬ ದ್ವಾರಪಾಲಕನು ಮಾತ್ರ ಸ್ವಲ್ಪ ದೂರದಲ್ಲಿ ಉಮ್ಮಳಿಸಿ ಉಸಿರು ಬಿಡುತ್ತ, ಅಳುತ್ತಿದ್ದನು.

ರಾಜನು ಕೇಳಿದನು: "ಎಲೇ ಸೌಮ್ಯಪುರುಷ! ನನ್ನ ತಂದೆಯು ಮರಣ ಹೊಂದಿದುದಕ್ಕಾಗಿ ಎಲ್ಲರೂ ಸಂತೋಷಾಚರಣೆಯಲ್ಲಿರುವರು. ನೀನೊಬ್ಬನು ಮಾತ್ರ ಅಳುತ್ತಿರುವೆ. ನನ್ನ ತಂದೆಯು ನಿನಗೆ ಬಹಳ ಪ್ರೀತಿಯುವನಿದ್ದನೇ?"

ದ್ವಾರಪಾಲಕನೆಂದನು: "ಮಹಾರಾಜ, ನಾನು ಮಹಾ ಪಿಂಗಲನ ಮರಣಕ್ಕಾಗಿ ಶೋಕಪಡುತ್ತಿಲ್ಲ. ಅವನ ಮರಣದಿಂದ ನನಗೆ ಈಗ ಸೌಖ್ಯವುಂಟಾಗಿದೆ. ಆದರೆ, ಒಂದು ಯೋಚನೆಯಿಂದ ಅಳು ಬಂತು. ಮಹಾಪಿಂಗಲ ರಾಜನು, ಉಪ್ಪರಿಗೆಯಿಂದ ಕೆಳಗಿಳಿಯುವಾಗಲೂ ಮೇಲೆ ಹತ್ತುವಾಗಲೂ ನನ್ನ ತಲೆಗೆ ವಿನೋದವಾಗಿ ಕುಟ್ಟುತ್ತ ಹೋಗುತಿದ್ದನು. ನಾನು ದಿನಾಗಲೂ ಈ ನೋವನ್ನು ಸಹಿಸಿಕೊಂಡಿದ್ದೆ. ಅವನೀಗ ಯಮರಾಜನ

ಲ್ಲಿಗೆ ಹೋಗಿದ್ದಾನೆ. ಅಲ್ಲೆಲ್ಲಿಯಾದರೂ ಇದೇ ರೀತಿ ಹೊಡೆಯುತ್ತಿದ್ದರೆ, ಯುವರಾಜನು ಇವನ ಪೀಡೆ ಸಹಿಸಲಾರದೆ, ತಿರುಗಿ ಇಲ್ಲಿಗೇ ಕಳಿಸಿಕೊಡು ವನೋ ಎಂದು ಬೆದರಿದ್ದೇನೆ; ಹಾಗೆ ಅವನು ಬಂದರೆ, ಪುನಃ ನನ್ನ ತಲೆಯು ಅವಸ್ಥೆ ಮೊದಲಿನಂತೆಯೇ ಆಗುವದಲ್ಲವೆ?—ಎಂದು ಅಳುತ್ತಿದ್ದೇನೆ."

(ಹೀಗೆ, ದುಷ್ಟರು ಮರಣ ಹೊಂದಿದರೂ ಕೆಲವರಿಗೆ ದುಃಖ ಕೊಡು ವರು.)

■■■■■■■■■

## ೪. ದೇವತೆಗಳ ಕುರಿತು

ಈ ಲೋಕದಲ್ಲಿ ನಾವು ರಾಜರ ಅಧಿಕಾರವನ್ನು ಕಾಣುವೆವು. ಪರ ಲೋಕದಲ್ಲಿ ದೇವತೆಗಳ ಅಧಿಕಾರವಿದೆ. ದೇವತೆಗಳಿಗೂ ನಾವು ಬಲಿ (ತೆರಿಗೆ) ಕೊಡಬೇಕು. ಅದೇ ಹೋಮ ಪೂಜೆ. ದೇವತೆಗಳೂ ಇದರಿಂದ ಸಂತು ಷ್ಟಿಗೊಳ್ಳುವರು. ವೈದಿಕ ಕಾಲವು ಅಂತಹುದು. ಮುಂದೆ ಯಜ್ಞ, ಬಲಿಯ ಪ್ರೀತಿ—ಜನರಿಗೆ ಕಡಿಮೆಯಾಯಿತು. ಆ ಕಾಲಕ್ಕೆ ಸಂಬಂಧಿಸಿದ ಕಥೆಯೊಂದಿದೆ.

ಪೂರ್ವ ಕಾಲದಲ್ಲಿ ಬ್ರಹ್ಮದತ್ತರಾಜನು ರಾಜ್ಯಭಾರ ಮಾಡುತಿದ್ದಾಗ ಉದೀಚ್ಚಬ್ರಾಹ್ಮಣ ಕುಲದಲ್ಲಿ ಒಬ್ಬ ಕುಮಾರನ ಜನನವಾಯಿತು. ಹುಟ್ಟಿ ದೊಡನೆ ತಾಯ್ತಂದೆಗಳು ಯಜ್ಞಸಂಕಲ್ಪವನ್ನು ಗೈದರು. ಮಗನು ಹದಿ ನಾರು ವರ್ಷದವನಾಗುತ್ತಲೇ, ತಾಯ್ತಂದೆಗಳು, "ಮಗೂ, ನಿನ್ನ ಜನ್ಮದಿನ ನಾವು ಈ ಸಂಕಲ್ಪವನ್ನು ಮಾಡಿದ್ದೆವು. ನೀನು ಗೃಹಸ್ಥನಾಗಲೆಳಸುವಿಯಾ ದರೆ, ಮೂರು ವೇದಗಳನ್ನು ಕಲಿ. ಬ್ರಹ್ಮಲೋಕಕ್ಕೆ ಹೋಗಲೆಳಸುವಿಯಾ ದರೆ ಬೆಂಕಿಯನ್ನು ತೆಗೆದುಕೊಂಡು ಕಾಡಿಗೆ ಹೋಗು. ಅಲ್ಲಿ ಅಗ್ನಿ ಪೂಜೆ ಯನ್ನು ಮಾಡಿ ಬ್ರಹ್ಮಲೋಕವನ್ನು ಹೊಂದು"—ಎಂದರು.

ಮಗನು, "ನಾನು ಗೃಹಸ್ಥನಾಗಲೆಳಸುವುದಿಲ್ಲ"ವೆನ್ನುತ್ತ,—ಬೆಂಕಿ ಹಿಡಿದು ಕಾಡಿಗೆ ಹೋದನು. ಅಲ್ಲಿ ಒಂದು ಆಶ್ರಮವನ್ನು ರಚಿಸಿ, ಅಗ್ನಿ ಪೂಜೆಗೈಯುತಿದ್ದನು.

ಆ ಬ್ರಾಹ್ಮಣನಿಗೆ ಒಂದು ಗೋದಾನ ಸಿಕ್ಕಿತು. ಅವನು ಆ ಎತ್ತನ್ನು ಅಗ್ನಿದೇವತೆಗೆ ಕೊಡಬೇಕೆಂದು ಯೋಚಿಸಿದನು—(ಗೋಮಾಂಸವನ್ನು ಅಗ್ನಿದೇವತೆಗೆ ಕೊಡುವ ವಿಚಾರ ಮಾಡಿದನು.) ಆಗ, ಅವನಿಗೆ, 'ಉಪ್ಪಿ

ಲ್ಲದೆ ಅಗ್ನಿದೇವತೆಗೆ ಗೋಮಾಂಸವು ರುಚಿಸಲಾರದು' ಎಂಬ ಭಾವನೆ ಮೂಡಿತು. ಆದುದರಿಂದ, ಹಳ್ಳಿಗೆ ಹೋಗಿ, ಉಪ್ಪನ್ನು ತಂದು ಅಗ್ನಿದೇವತೆಗೆ ಉಣಬಡಿಸುವೆನೆಂಬ ನಿರ್ಧಾರ ಮಾಡಿದನು.

ಆ ಮೇಲೆ ಎತ್ತನ್ನು ಆಶ್ರಮದಲ್ಲಿ ಒಂದೆಡೆ ಕಟ್ಟಿದನು. ಉಪ್ಪು ತರಲು ಹಳ್ಳಿಯ ಕಡೆಗೆ ಕೂಡಲೇ ಪ್ರಯಾಣ ಬೆಳೆಸಿದನು. ಅವನು ಹೋದ ನಂತರ ಕೆಲವು ಬೇಟೆಗಾರರು ಆ ಆಶ್ರಮಕ್ಕೆ ಬಂದರು. ಆ ಬೇಟೆಗಾರರು ಆ ಎತ್ತನ್ನು ಕೊಂದು, ಬಾಲ, ಚರ್ಮಗಳನ್ನು ಮಾತ್ರ ಉಳಿಸಿ, ಮಾಂಸವನ್ನೆಲ್ಲ ತಿಂದುಕೊಂಡು ಹೋದರು.

ಹಿಂದಿರುಗಿ ಬಂದ ಬ್ರಾಹ್ಮಣನು—ಎಲುಬು, ಬಾಲ ಮತ್ತು ಚರ್ಮಗಳು ಮಾತ್ರ ಅಲ್ಲಿರುವುದನ್ನು ಕಂಡು, ಯೋಚನೆಗೊಳಗಾದನು. "ಅಗ್ನಿದೇವತೆಯು ತನ್ನ ಉಣಿಸನ್ನು ಉಳಿಸಿಕೊಳ್ಳಲಿಲ್ಲ. ಅಷ್ಟು ಶಕ್ತಿಯು ಆ ದೇವತೆಗಿರಲಿಲ್ಲ. ಇಂಥ ಅಗ್ನಿದೇವನು ಇನ್ನು ನನ್ನ ರಕ್ಷಣೆಯನ್ನು ಮಾಡುವುದಾದರೂ ಹೇಗೆ? ನಾನೇಕೆ ಅಗ್ನಿ ಪೂಜೆ ಮಾಡಬೇಕು? ನಿರರ್ಥಕ!" ಎಂದು ಮನಸ್ಸಿನಲ್ಲಿ ನಿರ್ಧರಿಸಿ, ಆ ಎತ್ತಿನ ಬಾಲವೇ ಮೊದಲಾದುವನ್ನು ಬೆಂಕಿಗೆಸೆದು, ಹೇಳಹತ್ತಿದನು:

"ಎಲೇ ಅಸತ್ಪುರುಷ! ಅಗ್ನಿದೇವ! ನಾನು ಬಾಲದಿಂದ ಈಗ ಮಾಡುವ ಈ ಪೂಜೆಯು ಹೆಚ್ಚಿನದೆಂದು ತಿಳಿಯುತ್ತೇನೆ. ನಿನಗೆ ಮಾಂಸವು ಸಿಗಬೇಕಿತ್ತು. ಆದರೆ, ಅದು ಉಳಿಯಲಿಲ್ಲ. ಆದ್ದರಿಂದ ಇದೋ—ಈ ಬಾಲವನ್ನು ಸ್ವೀಕರಿಸು!"

(ಇದು ಯಜ್ಞದೇವತೆಯಾದ ಅಗ್ನಿಯ ಕುರಿತು ಗೇಲಿಯ ಮಾತು. ಈ ಮಾತಿನಲ್ಲಿ ತುಂಬ ರಹಸ್ಯವಿದೆ. ಉಪನಿಷತ್ತುಗಳು ಯಜ್ಞಗಳ ವಿಚಾರವನ್ನು ಬಯಲಿಗೆಳೆಯುವುವು. ಕಾಠಕೋಪನಿಷತ್ತಿನ ವಾಜಶ್ರವಸನ ಕತೆಯನ್ನು ನೋಡಿದರೆ, ಎಲ್ಲವೂ ಭಾಸವಾಗುವುದು.)

▪▪▪▪▪▪▪▪▪

## ೫. ಸಾಮಾಜಿಕ ಧಾರಣೆ

ಸಮಾಜದಲ್ಲಿ ಸ್ತ್ರೀ-ಪುರುಷರ ಬಂಧವು ಹೇಗಿದೆ? ಆ ವಿಷಯದಲ್ಲಿ ನಾವು ಯಾವ ಭಾವನೆಯುಳ್ಳವರಿದ್ದೇವೆ?—ಅವುಗಳನ್ನೆಲ್ಲ ಶಾಶ್ವತವೆಂದೆಣಿಸುವವರೇ ಹೆಚ್ಚು. ಅಂಥ ಎಣಿಕೆಯು ಹಿಂದಿನಿಂದ ಬೆಳೆದುಬಂದುದೇ.

ಒಬ್ಬ ಆಚಾರ್ಯನಿದ್ದನು. ಅವನಿಗೊಬ್ಬ ಶಿಷ್ಯನಿದ್ದನು. ಶಿಷ್ಯನು ತನ್ನ ಪತ್ನಿಯಲ್ಲಿ ದೋಷವನ್ನು ಕಂಡನು. ಇದರಿಂದ ದುಃಖಿತನಾಗಿ ತನ್ನ ಆಚಾರ್ಯನಲ್ಲಿಗೆ ಕೆಲವು ದಿನಗಳ ತನಕ ಹೋಗದೆ, ಮನೆಯಲ್ಲುಳಿದನು. ಒಂದು ದಿನ ಉಪಾಧ್ಯಾಯನು, ಶಿಷ್ಯನಿಗೆ ಇಷ್ಟು ದಿನ ಎಲ್ಲಿಗೆ ಹೋದೆ ಮತ್ತು ಏಕೆ ಬರಲಿಲ್ಲ ಎಂದು ಪ್ರಶ್ನಿಸಿದನು. ಶಿಷ್ಯನು ತನ್ನ ಈ ವಿಚಾರ ವನ್ನು ಗುರುವಿಗೆ ನಿವೇದಿಸಿದ ಕೂಡಲೇ ಗುರುವು ಉಪದೇಶವಿತ್ತನು:

ಯಥಾ ನದೀಚ ಪಾಂಥೋಚ
ಪಾಣಗಾರಂ ಸಭಾಪಪಾ ।
ಏವಂ ಲೋಕಿತ್ಥಿಯೋ ನಾಮ
ನಾಸಂ ಕಜ್ಝಾಂತ ಪಂಡಿತಾ ॥

“ನದಿ, ರಾಜರಸ್ತೆ, ಸೇಂದಿಯಂಗಡಿ, ಧರ್ಮಶಾಲೆ ಮತ್ತು ಬಾವಿ, ಇವು ಹೇಗೆ ಲೋಕದ ಜನತೆಗೆ ಲಾಭದಾಯಕಗಳೋ ಅಂತೆಯೇ ಹೆಂಗುಸರು ಲೋಕದ ಜನರಿಗೆ ಲಾಭವನ್ನುಂಟು ಮಾಡುವರು. ಆದುದರಿಂದ ಪಂಡಿತರು ಅವರ ವಿಷಯದಲ್ಲಿ ಸಿಟ್ಟುಗೊಳ್ಳುವುದಿಲ್ಲ.”

(ಮೇಲಿನದು, ದುಷ್ಟಸ್ತ್ರೀಯ ವಿಷಯವಾಗಿ ಆಡಿದ ವ್ಯಂಗ್ಯೋಕ್ತಿಯಾಗಿದೆ. ಸ್ವಾರ್ಥವೇ ಪ್ರಧಾನವಾಗಿರುವ ಇನ್ನೊಂದು ಸ್ತ್ರೀಯ ವಿಷಯ ಇನ್ನೊಂದು ಕಥೆಯು ಈ ಕೆಳಗೆ ಕೊಡಲ್ಪಟ್ಟಿದೆ.)

ಒಮ್ಮೆ ಕೋಸಲ ದೇಶದ ಸಮೀಪ ಒಂದು ಕಾಡಿನಲ್ಲಿ ಮೂವರು ಬೇಸಾಯಗಾರರು ಬೇಸಾಯ ವೃತ್ತಿ ಮಾಡಿಕೊಂಡಿದ್ದರು. ಊರಲ್ಲಿ ಕೆಲವು ಕಳ್ಳರು ಲೂಟಿಮಾಡುತಿದ್ದರು. ಅರಸನು, ಆ ಕಳ್ಳರನ್ನು ಹಿಡಿಯಲು ದೂತರನ್ನು ಅಟ್ಟಿದನು. ಆದರೆ ಆ ದೂತರಿಗೆ ಕಳ್ಳರು ಸಿಗದೆ, ಆ ಮೂವರು ಒಕ್ಕಲಿಗರನ್ನು ಹಿಡಿದುತಂದು, ರಾಜನ ಮುಂದೆ ಹಾಜರು ಪಡಿಸಿದರು. ಆ ಸಮಯದಲ್ಲಿ ಒಬ್ಬಳು ಹೆಂಗುಸು ರಾಜನ ಮುಂದೆ ಬಂದು, ತನಗೆ ಹೊದಿಕೆ ಕೊಡು ಎಂದು ರಾಜನೊಡನೆ ಕೇಳಿದಳು. ಆ ಹೆಂಗುಸಿಗೆ ಬಟ್ಟೆಯನ್ನು ಕೊಡುವಂತೆ ರಾಜನು ಆಜ್ಞಾಪಿಸಿದನು. ಆಗ ಆ ಹೆಂಗುಸು ತನಗೆ ‘ಪುರುಷನೇ ಮುಸುಕುವ ಹೊದಿಕೆ ಬಟ್ಟೆ—ಪುರುಷ ರೂಪದ ಹೊದಿಕೆಯನ್ನೀಯಬೇಕೆಂ’ದು ಕೇಳಿದಳು.

ರಾಜನು ಕೇಳಿದನು: “ಈ ಮೂವರು ನಿನಗೇನಾಗಬೇಕು?”

"ಮಹಾರಾಜ! ಒಬ್ಬನು ನನ್ನ ಪತಿ; ಇನ್ನೊಬ್ಬನು ಮಗ; ಮತ್ತೊಬ್ಬನು ಸಹೋದರ."

"ಈ ಮೂವರಲ್ಲಿ ನಿನಗೆ ಯಾರು ಬೇಕು? ಕೇಳಿ ತೆಗೆದುಕೊ."

"ಮಹಾರಾಜ! ಈ ಮೂವರನ್ನೂ ಬಿಡುಗಡೆ ಮಾಡಲು ಸಾಧ್ಯವಿದ್ದರೆ ಬಿಡು. ಇಲ್ಲವಾದರೆ, ನನ್ನ ಸಹೋದರನನ್ನು ಕೊಡು."

"ಗಂಡ ಇಲ್ಲವೆ ಮಗನನ್ನು ಕೇಳಲಾರಿಯೇಕೆ? ಸಹೋದರನಿಂದ ನಿನಗೇನು ಫಲ?"

ಹೆಂಗುಸು ಹೇಳಿದಳು:

ಉಚ್ಛಂಗೇ ದೇವ! ಮೇ ಪುತ್ತೋ
ಪಥೇ ಧಾವಂತಿಯಾ ಪತಿ ।
ತಚ್ಚ ದೇಸಂ ನಪಸ್ಸಾಮಿ
ಯೇತಾ ಸೋದರ್ಥ ಮಾನಯೇ ॥

"ಎಲೇ ರಾಜ! ಮಕ್ಕಳು ಒಡಲನ್ನು ಹೊಂದಿ ಮಡಿಲಲ್ಲಿರುವರು. ಗಂಡನು, ದಾರಿ ಹೋಗುವವಳಿಗೆ ಸಿಗುತ್ತಿರುವನು. ಸಹೋದರನನ್ನು ಯಾವ ದೇಶದಿಂದಲೂ ಕೊಳ್ಳಲಾಗುವುದಿಲ್ಲ."

■■■■■■■■

## ೬. ಫಲ ಜ್ಯೋತಿಷ

ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯಭಾರ ಮಾಡುತ್ತಿದ್ದನು. ಆ ಸಮಯದಲ್ಲಿ ಕೆಲವು ನಗರವಾಸಿಗಳಿಗೆ ಹಳ್ಳಿಯ ಒಕ್ಕಲಿಗರು ತಮ್ಮ ಹೆಣ್ಣುಮಗಳನ್ನು ಕೊಡಲು ನಿಶ್ಚಯಿಸಿದರು. ನಗರವಾಸಿಗಳು ತಮ್ಮ ವಿಶ್ವಸ್ತ ಪುರೋಹಿತನೊಡನೆ ಈ ವಿಷಯದಲ್ಲಿ ಪ್ರಶ್ನಿಸಿದರು.

"ನಮಗೆ ಈ ದಿನ ಒಂದು ಮಂಗಲ ಕೆಲಸವನ್ನು ಮಾಡಲಿದೆ. ದಿನ ಶುದ್ಧಿ ಇರುವುದೇ?"

ಆಗ ಪುರೋಹಿತನು, ತನ್ನ ಅನುಮತಿಯಿಲ್ಲದೆ ಈ ಮಂದಿಗಳು ಈ ದಿನ ಶುಭಕೆಲಸವನ್ನು ಮಾಡಲಿರುವರು. ಶುಭಕೆಲಸದ ನಿರ್ಣಯವಾದ ನಂತರ ಈ ಪ್ರಶ್ನೆಯು ನನ್ನಲ್ಲಿಗೆ ಬಂದಿದೆ—ಎಂದು ಮನಸ್ಸಿನಲ್ಲಿ ನಿರ್ಣಯಿಸಿ ಸಿಟ್ಟುಗೊಂಡು ಹೇಳಿದನು:—

"ಇಂದು ನಕ್ಷತ್ರವು ಉತ್ತಮವಾಗಿರುವುದಿಲ್ಲ. ಈ ದಿನದಲ್ಲಿ ಮಂಗಲ ಕೃತ್ಯವನ್ನು ಮಾಡಿದರೆ ಮಾನವಿನಾಶ ಮತ್ತು ಸಂಕಟಗಳುಂಟಾಗುವುವು."

ನಗರವಾಸಿಗಳು ಪುರೋಹಿತನ ಮಾತಿಗೆ ನಂಬುಗೆ ಇಟ್ಟು ಮದುವೆಗೆ ಹೋಗಲಿಲ್ಲ. ಹಳ್ಳಿಗರು ನಗರವಾಸಿಗಳನ್ನು ಕಾಯುತ್ತ ಕುಳಿತರು. ಅವರು ಬಾರದಿರಲು ತಮ್ಮ ಕುವರಿಯನ್ನು ಬೇರೊಬ್ಬ ವರನಿಗೆ ಕೊಟ್ಟರು. ಮಾರಣೆಯ ದಿನ ನಾಗರಿಕರು ಹಳ್ಳಿಗರಲ್ಲಿಗೆ ಬಂದರು, ಮತ್ತು ಕನ್ನಿಕೆಯನ್ನು ಕೇಳಿದರು. ಆಗ ಒಕ್ಕಲಿಗರು ನಾಗರಿಕರನ್ನು ಕುರಿತು, "ನೀವು ಲಜ್ಜಾಹೀನ ಗೃಹಸ್ಥರು. ದಿನವನ್ನು ನಿರ್ಣಯಿಸಿ ಕನ್ನಿಕೆಯನ್ನು ಕೊಂಡೊಯ್ಯಲು ವಿವಾಹಕ್ಕೆ ಬಂದಿಲ್ಲ. ನಾವು ನಮ್ಮ ಕುವರಿಯನ್ನು ಅನ್ಯರಿಗೆ ಕೊಟ್ಟಿರುವೆವು"—ಎಂದರು.

ಆಗ ನಾಗರಿಕರು, "ನಾವು ಪುರೋಹಿತರಲ್ಲಿ ದಿನವನ್ನು ವಿಚಾರಿಸಿದೆವು. ಆಗ ಪುರೋಹಿತರು—'ದಿನವು ಉತ್ತಮವಿಲ್ಲ'ವೆಂದರು. ಆದುದರಿಂದ ನಾವು ಬರಲಿಲ್ಲ. ಈಗ ಹುಡುಗಿಯನ್ನು ಕೊಡಿರಿ" ಎಂದರು.

"ನೀವು ಬಾರದಿರಲು, ಹುಡುಗಿಯನ್ನು ಬೇರೆಯವರಿಗೆ ಕೊಟ್ಟೆವು. ವಿವಾಹ ನಡೆದು ಹೋಯಿತು. ಕೊಟ್ಟ ಹುಡುಗಿಯನ್ನು ಹಿಂದಿರುಗಿ ಕೊಡಲಾಗುವುದಿಲ್ಲ—" ಎಂದು ಹಳ್ಳಿಯವರೆಂದರು.

ಎರಡು ಪಕ್ಷಗಳವರಿಗೂ, ಈ ರೀತಿಯಾಗಿ ವಾದವಿವಾದಗಳು ನಡೆಯತೊಡಗಿದುವು. ಅಶಾಂತಿಯೆದ್ದಿತು. ಅಷ್ಟು ಹೊತ್ತಿನಲ್ಲಿ ಒಬ್ಬ ತಿಳಿವುಳ್ಳ ಜ್ಞಾನಿಯು ಅಲ್ಲಿಗೆ ಬಂದನು, ಮತ್ತು ಇವರ ಜಗಳಕ್ಕೆ ಕಾರಣವೇನೆಂದು ವಿಚಾರಿಸಿದನು, ವಿವರವನ್ನು ತಿಳಿದನು. ಆ ಮೇಲೆ, ತಿಳಿವಿರದ ಆ ನಾಗರಿಕರಿಗೆ ಅವನು ಈ ಕೆಳಗಿನ ಗಾದೆಯನ್ನು ಹೇಳಿದನು:

ನಕ್ಖತ್ತಂ ಪತಿಮಾನೇತಂ ಅತ್ಥೋ ಬಲಂ ಉಪಚ್ಚಗಾ।
ಅತ್ಥೋ ಅತ್ಥಸ್ಸ ನಕ್ಖತ್ತಂ ಕಿಂ ಕರಿಸ್ಸಂತಿ ತಾರಕಾ ॥

"ನಕ್ಷತ್ರವನ್ನು ನೋಡುತ್ತಾ ಸಮಯವನ್ನು ಕಾಯುವ ತಿಳಿಗೇಡಿಗಳ ಕೆಲಸಗಳು ನಾಶವಾಗುತ್ತಿವೆ. ಯಾವ ಕೆಲಸವನ್ನು ಮಾಡಲಿರುವೆವೋ ಅದಕ್ಕೆ ನಕ್ಷತ್ರ ಬೇಡ. ಕೆಲಸ ಮಾಡುವುದೇ ಅದರ ಶುಭನಕ್ಷತ್ರ. ಈ ನಕ್ಷತ್ರಗಳಿಂದೇನಾಗುವುದು?"

# ೭. ಹೆಸರಿನಿಂದ ಶುದ್ಧಿ

ತಕ್ಷಶಿಲೆಯಲ್ಲಿ ಬೋಧಿಸತ್ವನು ಹೆಸರುವಾಸಿಯಾದ ಆಚಾರ್ಯನೆನಿಸಿದ್ದನು. (ತಕ್ಷಶಿಲೆಯು ಪುರಾತನ ಪ್ರಸಿದ್ಧ ಗುರುಕುಲ. ಬುದ್ಧನಾಗುವ ಮೊದಲು ಬುದ್ಧನ ಹೆಸರು ಬೋಧಿಸತ್ವನೆಂದಿತ್ತು. ಬೋಧಿಸತ್ವನ ಹೆಸರು ಶಿಕ್ಷಣದ ಮೂಲಕ ಸಾರ್ವತ್ರಿಕ ಹರಡಿದ್ದಿತು.) ಬೋಧಿಸತ್ವನು ಐನೂರು ಮಂದಿ ಶಿಷ್ಯರಿಗೆ ವೇದಮಂತ್ರಗಳನ್ನು ಕಲಿಸುತಿದ್ದನು. ಆ ಶಿಷ್ಯರಲ್ಲಿ ಓರ್ವನ ಹೆಸರು 'ಪಾಪಕ'ನೆಂದಾಗಿದ್ದಿತು. ಜನರು ಅವನನ್ನು 'ಪಾಪಕ' ನೆಂದು ಕೂಗಿ ಕರೆಯುತ್ತಿರಲು, ಈ ಹೆಸರು ಪಾಪಕನಿಗೆ ರುಚಿಸುತ್ತಿರಲಿಲ್ಲ. ಆದರಿಂದ ಅವನು ಯೋಚನೆಗೊಳಗಾದನು. ತನಗೆ ಆ ಹೆಸರು ಒಪ್ಪದೆಂದೂ ಅಮಾಂಗಲಿಕವೆಂದೂ ಭಾವಿಸಿದನು. ಆ ಮೇಲೆ ಆ ಹೆಸರನ್ನು ತೊಡೆದು ಬೇರೆ ನಾಮಕರಣವನ್ನು ಉಪಾಧ್ಯಾಯನಿಂದ ಮಾಡಿಸುವ ಮನವುಳ್ಳವನಾದನು.

ಹೀಗೆ ಯೋಚಿಸಿ ಅವನು, ಬೋಧಿಸತ್ವನಲ್ಲಿಗೆ ಹೋಗಿ, ತನ್ನ ಆಚಾರ್ಯನೊಡನೆ ಹೀಗಂದನು: "ಗುರುವೇ, ನನ್ನ ಹೆಸರು ಅಭದ್ರವಾಗಿದೆ. ನನಗೆ ಬೇರೊಂದು ಹೆಸರನ್ನು ಕೊಡಿರಿ."

ಆಚಾರ್ಯರು, ಅವನನ್ನು ಒಂದು ನಿಮಿಷ ದಿಟ್ಟಿಸಿ, ಹೀಗೆಂದರು: "ಮಗೂ, ನೀನು ಹೋಗು. ಊರಲ್ಲಿ ಸುತ್ತಿ, ನಿನಗೆ ಹಿತಕರವೆನಿಸುವ ಒಂದು ಹೆಸರನ್ನು ಹುಡುಕು. ಮತ್ತೆ ಬಂದು ಅದನ್ನು ನನಗೆ ಹೇಳು. ಅದನ್ನೇ (ಆ ಹೆಸರನ್ನೇ) ನಿನಗೆ ಇಡಲಾಗುವುದು."

ಪಾಪಕನು, ಅದಕ್ಕೆ ಸಮ್ಮತಿಸಿ, ಪ್ರಯಾಣಕ್ಕೆ ಬೇಕಾದ ಬುತ್ತಿಯನ್ನು ಕಟ್ಟಿಕೊಂಡು, ಹೊರಟನು. ಹಳ್ಳಿಹಳ್ಳಿಗಳನ್ನು ಸುತ್ತಿ, ಕೊನೆಗೆ ಪಟ್ಟಣವನ್ನು ಪ್ರವೇಶಿಸಿದನು.

ಅಂದು, ನಗರದಲ್ಲಿ ಒಂದು ಮರಣವಾಗಿತ್ತು. ದಹನಕ್ಕಾಗಿ ಮೃತನ ಬಂಧುಗಳು, ಶವವನ್ನು ಹೊತ್ತುಕೊಂಡು ಸ್ಮಶಾನಕ್ಕೆ ಹೋಗುತ್ತಿದ್ದರು. ಪಾಪಕನು ಅದನ್ನು ಕಂಡು, ಅವರೊಡನೆ ಪ್ರಶ್ನಿಸಿದನು: "ಇವನ ಹೆಸರು ಏನಾಗಿದ್ದಿತ್ತು?"

"ಇವನ ಹೆಸರು ಜೀವಕನೆಂದಾಗಿದ್ದಿತು."

"ಜೀವಕನೂ ಮರಣ ಹೊಂದುವನೇ?"

"ಎಲ್ಲರೂ ಮಡಿಯುವರು. ಜೀವಕನೂ ಮಡಿಯುವನು, ಅಜೀವಕನೂ ಮರಣಹೊಂದುವನು. ಮತ್ತೊಬ್ಬನು ಗುರುತಿಸಲಿಕ್ಕಾಗಿ, ಗುರುತಿಸಿ ಕರೆಯುವುದಕ್ಕಾಗಿ ಹೆಸರಿಡುವುದು,—ಅಷ್ಟೆ. ನೀನು ಏನೂ ತಿಳಿಯದಿರುವ ಅಜ್ಞಾನಿಯೆಂದು ತೋರುತ್ತಿರುವೆ. ಹೀಗೆ ಕೇಳುತ್ತಿರುವುದಕ್ಕಿಂತಲೂ ಹೆಚ್ಚಿನ ತಿಳಿಗೇಡಿತನವೇನಿದೆ?"

ಪಾಪಕನಿಗೆ ಇದನ್ನು ಕೇಳಿ, ತನ್ನ ಹೆಸರಿನಲ್ಲಿರುವ ಜುಗುಪ್ಸೆಯು ಕಿಂಚಿನ್ಮಾತ್ರ ಕಡಿಮೆಯಾಯಿತು. ಅಲ್ಲಿಂದ ಮುಂದೆ ಹೊರಟನು. ಅದೇ ನಗರದಲ್ಲಿ ಒಬ್ಬನು ತನ್ನ ದಾಸಿಯನ್ನು, ಕೆಲಸದ ಮಜೂರಿ ತಾರದುದಕ್ಕಾಗಿ ಹಗ್ಗದಿಂದ ಹೊಡೆದು ಶಿಕ್ಷಿಸುತ್ತಿದ್ದನು. (ಆ ಕಾಲದಲ್ಲಿ ಹೆಂಗಸರ ವಿಕ್ರಯವು ನಡೆಯುತ್ತಿತ್ತು. ಧನಿಕರು, ಕ್ರಯಕ್ಕೆ ಹೆಂಗಸರನ್ನು ಪಡೆದು ದಾಸಿಯರನ್ನಾಗಿ ಇಟ್ಟುಕೊಳ್ಳುತ್ತಿದ್ದರು. ಗುಲಾಮತನಕ್ಕೆ ಉಪಯೋಗಿಸುವ ಈ ಸಂಪ್ರದಾಯವು ಧನಿಕರಲ್ಲಿ ಬಹಳವಾಗಿದ್ದು, ಆ ದಾಸಿಯರನ್ನು ಪಾಲಿ ಭಾಷೆಯಲ್ಲಿ 'ಭೃತಿಯರೆ'ಂದು ಕರೆಯುತಿದ್ದರು.) ಆ ದಾಸಿಯ ಹೆಸರು "ಧನಪಾಲಿ"ಯೆಂದಾಗಿದ್ದಿತು. ಪಾಪಕನು ಆ ದಾರಿಯಲ್ಲಿ ಹೋಗುತ್ತಿರಲು ದಾಸಿಯ ಕನಿಕರದ ಅವಸ್ಥೆಯನ್ನು ಕಂಡನು. ಮತ್ತೆ ಪ್ರಶ್ನಿಸಿದನು:

"ಈಕೆಯನ್ನು ಏಕೆ ಶಿಕ್ಷಿಸುವೆ?"

"ಈಕೆ ಇಂದಿನ ಮಜೂರಿಯನ್ನು ತಂದಿಲ್ಲ."

"ಈಕೆಯ ಹೆಸರೇನು?"

"ಧನಪಾಲಿ."

"ಧನಪಾಲಿ ಎಂಬ ಈಕೆಯು ಧನವನ್ನು ಪಾಲಿಸಳೇ? ಕೆಲಸದ ಮಜೂರಿಯನ್ನು ಈಕೆಯಿಂದ ತಂದುಕೊಡಲಾಗುವುದಿಲ್ಲವೇ?"

"ಧನಪಾಲಿಯೆಂದ ಮಾತ್ರಕ್ಕೆ ಧನವಂತೆಯಾಗಬೇಕೇ? ಧನಪಾಲಿಸುವವಳಾಗಬೇಕೇ? ಹೆಸರಿಡುವುದು, ಜನರನ್ನು ಗುರುತಿಸಲಿಕ್ಕೆ ಮಾತ್ರ. ನೀನು ತಿಳಿಗೇಡಿಯೆಂದು ತೋರುತ್ತಿರುವೆ!"

ಇದನ್ನು ಕೇಳಿದೊಡನೆ ಪಾಪಕನಿಗೆ, ತನ್ನ ಹೆಸರಿನಲ್ಲಿರುವ ತುಚ್ಛಭಾವನೆಯು ಇನ್ನೂ ಕಡಿಮೆಯಾಯಿತು. ಉದಾಸೀನ ಮನಸ್ಕನಾಗಿ ಅಲ್ಲಿಂದ ಮುಂದುವರಿದನು.

ದಾರಿಯಲ್ಲಿ, ಒಬ್ಬನು ದಿಕ್ಕುಗೆಟ್ಟು ತಲ್ಲಣಗೊಂಡುದನ್ನು ಪಾಪಕನು

ಕಂಡನು. ಅಲ್ಲಲ್ಲಿ ಸುತ್ತುತ್ತಿರುವ ಅವನನ್ನು ನೋಡಿ ಪಾಪಕನು ಪ್ರಶ್ನಿಸಿದನು: "ನೀನು ಎಲ್ಲಿಗೆ ಹೋಗುತ್ತಿರುವೆ? ಅಲ್ಲಲ್ಲಿ ನೋಡುತ್ತಿರುವೆಯೇಕೆ?"

"ದಾರಿ ತಪ್ಪಿಹೋಗಿದೆ."

"ನಿನ್ನ ಹೆಸರೇನು?"

"ಪಂಥಕ."

"ಪಂಥಕನೂ ದಾರಿ ತಪ್ಪುವನೇ?"

"ಪಂಥಕನೂ ದಾರಿ ತಪ್ಪುವನು. ದಾರಿ ತಪ್ಪದವರಾರು? ಅನ್ಯರನ್ನು ಗುರುತಿಸಲೂ ಕರೆಯಲೂ ಹೆಸರು ಇರುವುದು. ನಿನ್ನ ಪ್ರಶ್ನೆಯನ್ನು ಕೇಳಿದರೆ, ನೀನೊಬ್ಬ ಮೂರ್ಖನೆಂದು ತಿಳಿಯಬೇಕಾಗಿದೆ."

ಪಾಪಕನಿಗೆ, ತನ್ನ ಹೆಸರಲ್ಲಿ ಘೃಣಾಭಾವವು ಕೂಡಲೇ ಇಲ್ಲದಾಯಿತು. ಅಲ್ಲಿಂದಲೇ ನೇರಾಗಿ ಬೋಧಿಸತ್ವನಲ್ಲಿಗೆ ತೆರಳಿದನು. ಬೋಧಿಸತ್ವನು, ಬಂದ ಶಿಷ್ಯನಿಗೆ, "ಎಲೇ ಛಾತ್ರ! ನಿನಗೊಪ್ಪುವ ಹೆಸರನ್ನು ಆರಿಸಿದೆಯಾ?" ಎಂದು ಪ್ರಶ್ನಿಸಿದನು.

ಪಾಪಕನು ದೈನ್ಯದಿಂದ ಹೇಳಿದನು: "ಗುರುವರ್ಯ! ಜೀವಕನೂ ಮರಣ ಹೊಂದುವನು, ಅಜೀವಕನಿಗೂ ಮರಣವಿದೆ. ಧನಪಾಲಿಯೂ ದರಿದ್ರಳಾಗುವಳು, ಅಧನಪಾಲಿಯೂ ಸಿರಿಯುಳ್ಳವಳಾಗುವಳು! ಪಂಥಕನು ಹಾದಿ ತಪ್ಪುವನು, ಅಪಂಥಕನೂ ತಪ್ಪುವನು! ಹೆಸರು, ಮನುಷ್ಯನನ್ನು ಕರೆಯಲಿಕ್ಕಾಗಿಯೇ ಇದೆ. ಹೆಸರಿನಿಂದ ಯಾವುದೂ ಸಿದ್ಧಿಸುವುದಿಲ್ಲ, ಯಾವ ಪ್ರಯೋಜನವೂ ಒದಗಲಾರದು. ಎಲ್ಲವೂ ಮನುಷ್ಯನ ಕರ್ಮದಲ್ಲಿ ಸೇರಿದೆ. ನನಗೆ ಬೇರೆ ಹೆಸರಿನ ಆವಶ್ಯಕತೆಯಿಲ್ಲ. ಈಗ ಯಾವ ಹೆಸರಿದೆಯೋ ಅದೇ ಸಾಕು!"

ಆಗ, ಬೋಧಿಸತ್ವನು ನುಡಿದನು:

ಜೀವಕಂ ಚ ಮತಂ ದಿಸ್ವಾ ಧನಪಾಲಿಂಚ ದಗ್ಗತಂ ।
ಪಂಥಕಂಚ ವನೇ ಮೂಳಹಂ ಪಾಪಕೋ ಪುನರಾಗತೋ ॥

"ಜೀವಕನು ಸತ್ತುದನ್ನು ಕಂಡು, ಬಡವೆಯಾದ ಧನಪಾಲಿಯನ್ನು ನೋಡಿ, ಕಾಡಿನಲ್ಲಿ ಸುತ್ತುತ್ತಿರುವ ಪಂಥಕನನ್ನು ಸಂದರ್ಶಿಸಿ, ಪಾಪಕನು ಪುನರಾಗಮಿಸಿದನು."

■■■■■■■■

# ೮. ಸೂರ್ಯ ನಮಸ್ಕಾರ

ಬೋಧಿಸತ್ವನು ಆ ಕಾಲದಲ್ಲಿ ಇಲಿಯ ಜನ್ಮವೆತ್ತಿದನು. ಆ ಇಲಿಯು ಬಳೆಯಿತು. ದೇಹದಿಂದ ಬಳೆದು, ಹಂದಿಯ ಮರಿಯಂತೆ ತೋರಹತ್ತಿ ಕಾಡಿನಲ್ಲಿರುವ ಅನೇಕ ಇಲಿಗಳ ಗುಂಪಿನೊಂದಿಗೆ ವಾಸಿಸ ತೊಡಗಿತು. ಈ ರೀತಿ ಕಾಡಿನಲ್ಲಿ ಬೋಧಿಸತ್ವನು ಇಲಿಯ ರೂಪದಲ್ಲಿದ್ದು ಅತ್ತಿತ್ತ ವಿಹರಿಸತೊಡಗಿದನು.

ಅದೊಂದು ದಿನ ಒಂದು ನರಿಯು ಕಾಡಿನಲ್ಲಿ ಸಂಚರಿಸುತ್ತಿರಲು, ಕಾಡಿನಲ್ಲಿರುವ ಈ ಇಲಿಗಳ ತಂಡವನ್ನು ಕಂಡಿತು. ಇಲಿಗಳ ಗುಂಪನ್ನು ನೋಡಿದುದೇ ತಡ, ನರಿಯ ಮನಸ್ಸಿನಲ್ಲಿ ಅವುಗಳನ್ನು ಮೋಸಗೊಳಿಸಿ ತಿನ್ನಬೇಕೆಂಬ ಹವಣಿಕೆಯುಂಟಾಯಿತು. ಈ ಆಲೋಚನೆಯಾದೊಡನೆ ಅದು ಇಲಿಗಳ ಬಿಲದ ಎದುರಾಗಿ, ಸ್ವಲ್ಪ ಮುಂದೆ, ಸೂರ್ಯಾಭಿಮುಖ ವಾಗಿ ನಿಂತು, ಮೇಲ್ಮೊಗವಾಗಿ ಸೂರ್ಯನನ್ನು ನೋಡಿ, ಬಾಯಿಬಿಟ್ಟು ಒಂದು ಕಾಲಿನಿಂದ ನಿಂತಿತು. ಹೀಗೆ ನಿಂತಿರುವ ನರಿಯು, ಗಾಳಿಯನ್ನು ಸೇವಿಸುವಂತೆ ಕಾಣುತಿತ್ತು.

ಬೋಧಿಸತ್ವನು ಕಾಡಿನಲ್ಲಿ ತಿರುಗುತ್ತಾ, ಬಿಲದ ಬಳಿಗೆ ಬಂದನು. ಎದುರಲ್ಲಿ ನರಿ ನಿಂತಿತ್ತು. ಅದನ್ನು ನೋಡಿದೊಡನೆ ಬೋಧಿಸತ್ವನ ಮನಸ್ಸಿನಲ್ಲಿ, ನರಿಯು ಸದಾಚಾರಿಯಾದ ಪ್ರಾಣಿಯೆಂಬ ಭಾವನೆಯುಂಟಾ ಯಿತು. ಬೋಧಿಸತ್ವನು ಕೂಡಲೇ ಪ್ರಶ್ನಿಸಿದನು: "ತಮ್ಮ ಶುಭನಾಮ ಯಾವುದು?"

"ಧಾರ್ಮಿಕನೆಂದು ನನ್ನ ಹೆಸರು.''

"ತಾವು ನಾಲ್ಕು ಕಾಲುಗಳಿಂದ ನಿಲ್ಲದೆ ಒಂದು ಕಾಲಿನಿಂದ ನಿಲ್ಲಲು ಕಾರಣವೇನು?"

"ನಾಲ್ಕು ಪಾದಗಳನ್ನೂ ಭೂಮಿಗಿರಿಸಿದರೆ ಭೂಮಿಗೆ ವಿಶೇಷ ಭಾರ ವಾಗುವುದು. ಆದಕಾರಣ ಒಂದೇ ಕಾಲಿನಿಂದ ನಿಂತಿರುತ್ತೇನೆ."

"ಬಾಯಿ ತೆರೆದು ನಿಂತಿರುವಿರೇಕೆ?"

"ಗಾಳಿಗಾಗಿ! ಗಾಳಿಯ ವಿನಾ ಅನ್ಯ ಆಹಾರವು ನನಗಿಲ್ಲ."

"ಸೂರ್ಯಾಭಿಮುಖವಾಗಿ ನಿಂತಿರುವ ಉದ್ದೇಶವಾವುದು?"

"ಸೂರ್ಯ ನಮಸ್ಕಾರ ಮಾಡುತಿದ್ದೇನೆ."

ಬೋಧಿಸತ್ವನು ಈ ಮಾತು ಕೇಳಿದೊಡನೆ ನರಿಯ ಮೇಲೆ ಗೌರವ ಭಾವ ತಾಳಿದನು. ನರಿಯು ಸದಾಚಾರಿಯಾದ ಸಜ್ಜನಪಶುವೆಂಬುದರಲ್ಲಿ ಅನುಮಾನ ಉಳಿಯಲಿಲ್ಲ. ಆ ಮೇಲೆ ಬೆಳಗ್ಗೆ ಮತ್ತು ಸಾಯಂಕಾಲದ ಹೊತ್ತು ತನ್ನ ಸಂಗಡಿಗರೊಂದಿಗೆ ತಿರುಗಾಡಹೋಗುತ್ತಿರುವ ಬೋಧಿಸತ್ವನು, ಎರಡು ಹೊತ್ತೂ ಆ ನರಿಯ ಸೇವೆ ಮಾಡತೊಡಗಿದನು. ಇಲಿಗಳು, ನಿತ್ಯವೂ ನರಿಯ ಸೇವೆ ಮಾಡಿಯೇ ತಮ್ಮ ಬಿಲಸೇರುತಿದ್ದುವು. ನರಿಯು ದಿನ ದಿನ ಎರಡೂ ಹೊತ್ತು ಇಲಿಗಳು ಹಿಂದಿರುಗುವಾಗ, ಕೊನೆಯ ಇಲಿಯನ್ನು ಹಿಡಿದು ತಿಂದು ಸೌಖ್ಯವಾಗಿತ್ತು. ತಿಂದು ಮುಗಿಯುತ್ತಲೇ ಬಾಯಿಯನ್ನುಜ್ಜಿ, ಕೂಡಲೇ ಯಥಾರೀತಿ ಸೂರ್ಯಾಭಿಮುಖವಾಗಿ ನಿಲ್ಲುತಿತ್ತು.

ಈ ವರ್ತನೆಯಿಂದ ಇಲಿಗಳ ಸಂಖ್ಯೆಯು ಕಡಮೆಯಾಗತೊಡಗಿತು. ಇಲಿಗಳು ಯೋಚಿಸತೊಡಗಿದುವು: "ನಾವು ಈ ಮೊದಲು ಈ ಬಿಲದಲ್ಲಿ ಮೈ ಮೈ ತಾಗಿ ಉಳಿಕೊಳ್ಳುತಿದ್ದೆವು. ಈಗ ಅಂತಹ ಕಠಿನ ಸ್ಥಿತಿಯು ದೂರವಾಗತೊಡಗಿದೆ. ಈ ಬಿಲವು ನಮಗೆಲ್ಲರಿಗೂ ಹಿಂದೆ ಸಾಕಾಗುತಿದ್ದಿಲ್ಲ, ಇಂದು ಸಾಕಾಗತೊಡಗಿದೆ. ಈಗ ಪ್ರತಿಯೊಬ್ಬನಿಗೂ ಸ್ಥಳಾವಕಾಶವಿದೆ; ಸ್ಥಳಸಂಕೋಚವೇ ಉಂಟಾಗುತ್ತಿಲ್ಲ, ಬಿಲ ತುಂಬುವುದೂ ಇಲ್ಲ. ಇದಕ್ಕೆ ಕಾರಣವೇನು?"

ಬೋಧಿಸತ್ವನು ಈ ಕಾರಣವನ್ನರಿಯುವ ಉದ್ದೇಶವುಳ್ಳವನಾದನು. ಎಂದಿನಂತೆ ನರಿಯ ಸೇವೆಗೆ ಹೋದನು. ನರಿಯ ಸೇವೆ ನಡೆಸಿದ ಬಳಿಕ, ಎಲ್ಲ ಇಲಿಗಳನ್ನೂ ಮುಂದೆ ಹಾಕಿ ತಾನು ಹಿಂದೆ ಉಳಿದನು. ನರಿಯು ಬೋಧಿಸತ್ವನನ್ನು ಆಮುಕಿತು. ಕೂಡಲೇ ಬೋಧಿಸತ್ವನು ಅದನ್ನು ತಪ್ಪಿಸಿಕೊಂಡನು. ನರಿಯು ತನ್ನನ್ನು ಹಿಡಿಯಲು ಯತ್ನಮಾಡುವುದನ್ನು ಕಂಡು ಅವನು ಹೇಳತೊಡಗಿದನು:

"ಓ ನರಿಯೆ! ಇದು ನಿನ್ನ ತಪೋನಿಯಮದ ವ್ರತವಲ್ಲ. ಧಾರ್ಮಿಕ ಭಾವನೆ ನಿನಗಿಲ್ಲ. ನೀನು ಬೇರೆಯವರನ್ನು ಹಿಂಸೆಗೊಳಿಸುವುದಕ್ಕಾಗಿಯೇ ಧರ್ಮ ಕವಡು ವೇಷವನ್ನು ಧರಿಸಿ ನಿಂತಿರುವೆ. ಕೇಳು.

ಯೋ ವೇ ಧಮ್ಮಂಧಜಂ ಕೃತ್ವಾ ನಿಗೂಳ ಹೋ ಪಾಪಮಾಚರೇ ।
ವಿಶ್ವಾಸಯಿತ್ವಾ ಭೂತಾನಿ ವಿಳಾಟಂ ನಾಮತಂ ವತಂ ॥

"ಯಾವನು ಧರ್ಮದ ಬಾವುಟವನ್ನು ಎತ್ತಿಹಿಡಿದು ಪ್ರಾಣಿಗಳಲ್ಲಿ ವಿಶ್ವಾಸವನ್ನು ಹುಟ್ಟಿಸಿ, ಮೋಸದಿಂದ ಪಾಪವನ್ನು ಮಾಡುತ್ತಾನೆಯೋ ಅವನ ವ್ರತವು ನರಿಯ ವ್ರತವಾಗಿದೆ."

■■■■■■■■

## ೯. ಸ್ಪೃಶ್ಯಾಸ್ಪೃಶ್ಯತೆ

ಬೋಧಿಸತ್ವನು ಚಂಡಾಲರ ಕುಲದಲ್ಲಿ ಜನ್ಮವೆತ್ತಿದನು. ಹಾಗಿದ್ದರೂ, ಅದೃಷ್ಟಶಾಲಿಯಾಗಿ ಬೆಳೆಯುತಿದ್ದನು. ಒಂದು ದಿನ, ಒಂದು ದೀರ್ಘ ಪ್ರಯಾಣವನ್ನು ಕೈಕೊಳ್ಳುವ ಪ್ರಸಂಗವೊದಗಿತು. ಪ್ರಯಾಣಕಾಲಕ್ಕೆ ಬೇಕಾದ ಬುತ್ತಿ ಕಟ್ಟಿಕೊಂಡು ಹೊರಟನು.

ಈ ಕಾಲದಲ್ಲಿ, ವಾರಣಾಸಿಯಲ್ಲಿ ಒಬ್ಬ ಬ್ರಾಹ್ಮಣ ತರುಣನಿದ್ದನು. ಅವನ ಹೆಸರು ಸತ್ಯಧರ್ಮನೆಂದಾಗಿತ್ತು. ಉದೀಚ್ಯ ಗೋತ್ರದ ಧನಸಮೃದ್ಧ ಬ್ರಾಹ್ಮಣ ಕುಟುಂಬದಲ್ಲಿ ಅವನು ಜನಿಸಿದವನಿದ್ದನು. ಈ ಬ್ರಾಹ್ಮಣ ತರುಣನಿಗೂ ಪಯಣ ಬೆಳೆಸುವ ಸಂಭವವೊದಗಿತು. ಮನೆಯಿಂದ ಹೊರಟನು. ಆದರೆ, ಬುತ್ತಿಕಟ್ಟಿಕೊಂಡಿರಲಿಲ್ಲ.

ರಾಜರಸ್ತೆಯಲ್ಲೊಂದು ಕಡೆ, ಬ್ರಾಹ್ಮಣ ತರುಣನಾದ ಸತ್ಯಧರ್ಮ ಮತ್ತು ಚಂಡಾಲ ಬೋಧಿಸತ್ವನ ಸಂಯೋಗವುಂಟಾಯಿತು. ಬ್ರಾಹ್ಮಣ ತರುಣನು, ಬೋಧಿಸತ್ವನನ್ನು ಕಂಡೊಡನೆ ಪ್ರಶ್ನಿಸಿದನು:

“ನಿನ್ನ ಜಾತಿ ಯಾವುದು?”

“ನಾನು ಚಾಂಡಾಲ. ನೀನು?”

“ನಾನು ಉದೀಚ್ಯ ಬ್ರಾಹ್ಮಣ.”

“ಸಂತೋಷ! ಅಘಟಿತ ಘಟನೆ. ಪ್ರಯಾಣ ಬೆಳೆಸೋಣ.”

ಹೋಗುತ್ತಾ, ಬೋಧಿಸತ್ವನು ಒಂದು ಹಳ್ಳವನು ಕಂಡನು. ಕೈಕಾಲು ಮುಖ ತೊಳೆದು, ತನ್ನ ಬುತ್ತಿಯನ್ನು ತೆಗೆದನು. ಆ ಮೇಲೆ ಬ್ರಾಹ್ಮಣ ತರುಣನೊಡನೆ “ಅನ್ನ ಉಣ್ಣುವೆಯಾ?” ಎಂದು ಪ್ರಶ್ನಿಸಿದನು. ಸತ್ಯಧರ್ಮನು ಕೂಡಲೇ, “ಇಲ್ಲ. ನಾನು ಬ್ರಾಹ್ಮಣ!”—ಎಂದನು.

“ತಮ್ಮ ಇಚ್ಛೆ!” ಎನ್ನುತ್ತ ಬೋಧಿಸತ್ವನು, ತನಗೆ ಬೇಕಾದಷ್ಟೆ ಅನ್ನವನ್ನು ಎಲೆಗೆ ಹಾಕಿಕೊಂಡು, ಸುಖವಾಗಿ ಭುಂಜಿಸಿದನು. ಭೋಜನಾನಂತರ ನೀರು ಕುಡಿದು, ಮುಖ ತೊಳೆದು, ಉಳಿದ ಬುತ್ತಿಯನ್ನು ಹಿಡಿದುಕೊಂಡು, ಮುಂದರಿಯೋಣ ಎಂದು ಬ್ರಾಹ್ಮಣತರುಣನೊಡನೆ ಹೇಳಿದನು.

ಈ ರೀತಿ ಅವರೀರ್ವರೂ ಮುಂದರಿದರು. ಬೆಂಗದಿರನ ತಾಪವು ಏರಿತು. ಮುಂದೆ ಸಂಜೆಯೂ ಬಂತು. ಸಂಜೆಗೆ ಬೋಧಿಸತ್ವನು, ಆರಾ

ಮಕ್ಕೆ ಯೋಗ್ಯವಾದ ಸ್ಥಳವನ್ನು ಹೊಂದಿದೊಡನೆ, ಬ್ರಾಹ್ಮಣ ಕುವರನಿಗೂ ಅಲ್ಲಿ ತಂಗುವಂತೆ ಹೇಳಿದನು. ಅಲ್ಲಿ ಇಬ್ಬರೂ ತಂಗಿಕೊಂಡರು. ಬೋಧಿಸತ್ವನು, ಬ್ರಾಹ್ಮಣ ಕುವರನೊಡನೆ ಮಾತೆತ್ತದೆ, ತನ್ನ ಬುತ್ತಿ ತೆಗೆದು ಊಟಮಾಡತೊಡಗಿದನು. ದಿನವಿಡೀ ನಡೆದು ಬಂದ ಬ್ರಾಹ್ಮಣ ತರುಣನು ಬಹಳವಾಗಿ ದಣಿದಿದ್ದನು. ಹಸಿವೂ ಹೆಚ್ಚಿತ್ತು. ಬೋಧಿಸತ್ವನು ಉಣ್ಣುತ್ತಿದ್ದಂತೆ ಬ್ರಾಹ್ಮಣ ಕುವರನು ಅವನ ಕೈಬಾಯಿಗಳನ್ನು ನೋಡತೊಡಗಿದನು. ಅವನ ಬಾಯಲ್ಲಿ ನೀರೂರತೊಡಗಿತು. "ಈಗ ಇವನು ಅನ್ನ ಕೊಟ್ಟರೆ ಉಣ್ಣುತ್ತಿದ್ದೆ!" ಎಂದು ಅವನ ಮನಸ್ಸು ನುಡಿಯುಹತ್ತಿತು.

ತರುಣ ಬ್ರಾಹ್ಮಣನಿಗೆ ಹಸಿವು ತಡೆಯಲಾಗಲಿಲ್ಲ. ಈಗ ಮನಸ್ಸು, "ಈತನು ನನ್ನೊಡನೆ ಪುನಃ ಕೇಳದೆ ಊಟ ಮಾಡುತ್ತಿರುವನಲ್ಲ!" ಎನ್ನತೊಡಗಿತು. ಕಸಿವಿಸಿಯಿಂದ ಮತಿಗೆಟ್ಟಿತು. "ಈ ಕಠೋರ ಮನಸ್ಸಿನ ನೀಚನಿಂದ, ಅನ್ನವನ್ನು ಕಸಿದುಕೊಂಡೇ ಉಣ್ಣಬೇಕು" ಎಂದು ಅವನ ಮನಸ್ಸು ಹೇಳಿತು. ಹಾಗೇ ಕೈಚಾಚಿ, ಅನ್ನವನ್ನೆಳೆದು, ಆ ಎಂಜಲನ್ನವನ್ನೆ ತಿಂದುಬಿಟ್ಟನು.

ಅಭಾಗಿ ಬ್ರಾಹ್ಮಣ ಕುವರನ 'ಧರ್ಮ' ಮತ್ತು 'ಜಾತಿ' ಈಗ ಇಲ್ಲದಾದುವು!

ಉಂಡು ಮುಗಿಯುತ್ತಲೇ, ಬ್ರಾಹ್ಮಣ ಕುವರನ ಮನಸ್ಸಿನಲ್ಲಿ ಪಶ್ಚಾತ್ತಾಪವುಂಟಾಯಿತು. ಒಡನೆಯೇ ವಾಂತಿಯುಂಟಾಯಿತು. ವಾಂತಿ ಮಾಡುತ್ತ ಅಳುತಿದ್ದನು ಮತ್ತು ಅನ್ನುತ್ತಿದ್ದನು:

ತಂಚ ಅಪ್ಪಂಚ ಉಚ್ಛಿಟ್ಠಂ ತಂಚ ಕಿಚ್ಛೇನ ನೋ ಅದಾ।
ಸೋಹಂ ಬ್ರಾಹ್ಮಣ ಜಾತಿಕೋ ಯಂ ತುಂತ್ತಂ ತಂಪಿ ಉಗ್ಗಂತ ॥

(**ತಾತ್ಪರ್ಯ:** ಅನ್ನ–ಅದೂ ಸ್ವಲ್ಪ. ಎಂಜಲು–ಅದನ್ನೂ ಬಹಳ ಕಷ್ಟದಿಂದ ಹೊಂದಿದೆ. ಬ್ರಾಹ್ಮಣ ಜಾತಿಯವನಾದರೂ ಉಂಡೆ. ಉಂಡುದೂ ಹೊರ ಬಂದಿತು.)



Edited, Printed and Published by K. V. Shenoy
at The Prabhat Printers, Ltd., Mangalore-1.